# ಬಾಲ ಮೇಳಗಳು

## ಕುಮಾರ್ ಅಮಲೇಂದು

ಜಾರ್ಖಂಡ್‌ನಲ್ಲಿ ಮಕ್ಕಳ ಶಿಕ್ಷಣವನ್ನು ಉತ್ತೇಜಿಸಲು, ಅಲ್ಲಿನ ಸ್ಥಳೀಯ ವ್ಯವಸ್ಥೆಯನ್ನು ಹೆಚ್ಚು ಬಲಪಡಿಸಬೇಕು ಎಂಬ ದೃಷ್ಟಿಕೋನದಿಂದ ಟಿ ಆರ್ ಐ-ಪ್ರೈಡ್ (TRI-PRIDE) ಯೋಜನೆಯ ಅಡಿಯಲ್ಲಿ ಮಹತ್ತ್ವದ ಪ್ರಯತ್ನಗಳನ್ನು ಕೈಗೊಳ್ಳಲಾಯಿತು. ಈ ಯೋಜನೆಯ ಮೂಲಕ, ಸಮುದಾಯದ ಸಹಭಾಗಿತ್ವದಲ್ಲಿ ಮಕ್ಕಳ ಶಿಕ್ಷಣದ ನಿರಂತರತೆ ಮತ್ತು ಗುಣಮಟ್ಟವನ್ನು ಖಾತ್ರಿಪಡಿಸುವ ಪ್ರಯತ್ನವನ್ನು ಸಹ ಇದು ಹೊಂದಿತ್ತು.

ವಿದ್ಯಾ ಭವನ ಸೊಸೈಟಿಯು ಈ ಗುರಿಯನ್ನು ಸಾಧಿಸಲು ವಿವಿಧ ರೀತಿಯಲ್ಲಿ ಕೆಲಸ ಮಾಡುತ್ತಿದೆ. ಅವುಗಳೆಂದರೆ: ಪೋಷಕರು ಮತ್ತು ಮಕ್ಕಳ ನಡುವೆ ಪರಸ್ಪರ ಸಂವಹನವನ್ನು ಹೆಚ್ಚಿಸುವುದು, ಪೋಷಕರು ಮತ್ತು ಶಾಲೆಯ ನಡುವಿನ ಭಾಗವಹಿಸುವಿಕೆಯನ್ನು ಹೆಚ್ಚು ಬಲಪಡಿಸುವುದು, ಹಾಗೆಯೇ

ಸ್ಥಳೀಯ ಸಮುದಾಯಗಳು ನಿರಂತರವಾಗಿ ಶಾಲೆಗಳಿಗೆ ಭೇಟಿಯಿತ್ತು ಮತ್ತು ಶಿಕ್ಷಕರನ್ನು ಭೇಟಿ ಮಾಡಿ ಪ್ರತಿ ಮಗುವಿಗೂ ಶಿಕ್ಷಣ ಸಿಗುವಂತೆ ನೋಡಿಕೊಳ್ಳಲು ಅವರನ್ನು ಪ್ರೇರೇಪಿಸುವುದು. ಇದರ ಉದ್ದೇಶ ಪ್ರತಿ ಮಗುವಿಗೂ ಶಿಕ್ಷಣ ಸಿಗಬೇಕು ಎಂಬುದಾಗಿತ್ತು ಮತ್ತು ಇದನ್ನು ಸಾಧಿಸಲು ವಿದ್ಯಾ ಭವನ ತಂಡವು ಜನವರಿ 2017 ರಲ್ಲಿ ಜಾರ್ಖಂಡ್‌ನ ಗೋಲಾ, ರಾಮಗಢ ಮತ್ತು ಇತರ ಕೆಲವು ಪ್ರದೇಶಗಳಲ್ಲಿ ತನ್ನ ಕೆಲಸವನ್ನು ಪ್ರಾರಂಭಿಸಿತು.

ಪ್ರಾರಂಭದಲ್ಲಿ ನಾವು, ಶಿಕ್ಷಣಕ್ಕೆ ಸಂಬಂಧಪಟ್ಟಂತೆ ಹಲವು ಚರ್ಚೆಗಳನ್ನು ನಡೆಸಲು ಯೋಚಿಸಿದೆವು ಆದರೆ ಇದು ಕೇವಲ ವ್ಯಕ್ತಿಗಳಿಗೆ ಮಾತ್ರ ಸೀಮಿತವಾಗಿರದೆ, ಸಾಮೂಹಿಕವಾಗಿ ಗುಂಪುಗಳಲ್ಲಿ ಚರ್ಚೆ ನಡೆಯಬೇಕೆಂಬ ನಿಟ್ಟಿನಲ್ಲಿ ಸಾಕಷ್ಟು ಶ್ರಮಿಸಲಾಯಿತು. ವಿದ್ಯಾ ಭವನದ ಸಹಾಯಕ ಸಂಸ್ಥೆಯಾದ 'ಪ್ರದನ್' (PRADAN- Professional Assistance for Development Action) ಅನುಭವವನ್ನು ಗಣನೆಗೆ ತೆಗೆದುಕೊಂಡು, ಶೈಕ್ಷಣಿಕ ಸಮಸ್ಯೆಗಳ ಬಗ್ಗೆ ಮಾತನಾಡಲು ಗ್ರಾಮ ಪಂಚಾಯಿತಿ (Village Organization (VO) ಒಂದು ಉತ್ತಮವಾದ ವೇದಿಕೆಯಾಗಬಹುದು ಎಂದು ನಾವು ಕಂಡುಕೊಂಡೆವು. ಇದರಿಂದಾಗಿ ಜಂಟಿಯಾಗಿ ಪರಿಹಾರಗಳನ್ನು ಕಂಡುಕೊಳ್ಳುವ ಪ್ರಯತ್ನಗಳನ್ನು ಮಾಡಬಹುದು ಎಂಬುದನ್ನು ಅದು ಖಚಿತಪಡಿಸಿತು. ಈ ಸಮಯದಲ್ಲಿ, ಚೇಂಜ್ ವೆಕ್ಟರ್/ಎಜುಕೇಶನ್ ಚೇಂಜ್ ವೆಕ್ಟರ್ (CV/ECV) ನ

ಕೆಲವು ಅನುಭವಗಳನ್ನು ಪಡೆಯಲಾಯಿತು, ಏಕೆಂದರೆ ಅವುಗಳು ಸಮುದಾಯ ಮತ್ತು ಶಾಲೆಯ ನಡುವೆ ಒಂದು ಪ್ರಮುಖ ಕೊಂಡಿಯಾಗಿ ಕಾರ್ಯನಿರ್ವಹಿಸುತ್ತವೆ. 'ಪ್ರದನ್' (PRADAN) ತಂಡದ ಸದಸ್ಯರ ಸಹಾಯದಿಂದ, ಗ್ರಾಮ ಪಂಚಾಯಿತಿಯ ಸದಸ್ಯರು ಎಜುಕೇಶನ್ ಚೇಂಜ್ ವೆಕ್ಟರ್ (ECV) ಗಳನ್ನು ಆಯ್ಕೆ ಮಾಡಿದರು.

ಇಸಿವಿಗಳನ್ನು '*ದೀದಿಸ್*' ಎಂದು ಕರೆಯಲಾಗುತ್ತಿತ್ತು. ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡಲು ಇವರಿಗೆ ಮೂರು ಸುತ್ತಿನಲ್ಲಿ ಓರಿಯಂಟೇಶನ್ ಅನ್ನು ಕೊಡುವ ಅಗತ್ಯವಿತ್ತು. ಅವುಗಳೆಂದರೆ, ಮೂಲ ತರಬೇತಿ, ಸಾಫ್ಟ್ ಸ್ಕಿಲ್ಸ್/ಮೃದು ಕೌಶಲ್ಯದ ತರಬೇತಿ ಮತ್ತು ವಿದ್ಯಾ ಭವನದ ಕಾರ್ಯ ವಿಧಾನದ ಬಗ್ಗೆ ತರಬೇತಿ. ದೀದಿಗಳು ನಿರ್ವಹಿಸುತ್ತಿದ್ದ ಕೆಲಸದ ಕ್ಷೇತ್ರಗಳಲ್ಲಿ ಅವರು ತಿಂಗಳಿಗೊಮ್ಮೆ ಅಥವಾ ಎರಡು ತಿಂಗಳಿಗೊಮ್ಮೆ ಅವರ ಬ್ಲಾಕ್ ಹಂತದಲ್ಲಿ ಕಲಿಕೆ ಮತ್ತು ಅನುಭವಗಳನ್ನು ಹಂಚಿಕೊಳ್ಳಲು ಸಭೆಗಳನ್ನು ಆಯೋಜಿಸಬೇಕಾಗಿತ್ತು. ಇದಕ್ಕಾಗಿ ಅವರಿಗೆ ನಮ್ಮ ತಂಡದ ಸದಸ್ಯರು ಸಂಪೂರ್ಣವಾಗಿ ಸಹಕಾರವನ್ನು ನೀಡುತ್ತಿದ್ದರು. ವಿವಿಧ ಕಾರ್ಯವಿಧಾನಗಳ ಅಡಿಯಲ್ಲಿ ದೀದಿಗಳು ಹಲವು ಚಟುವಟಿಕೆಗಳಲ್ಲಿ ಬಹಳ ಮುಖ್ಯವಾದ ಪಾತ್ರವನ್ನು ವಹಿಸುತ್ತಿದ್ದರು. ಜೊತೆಗೆ ಅಂತಹ ಚಟುವಟಿಕೆಗಳಲ್ಲಿ ಸಮುದಾಯದ ಇತರ ಮಹಿಳೆಯರನ್ನೂ ಸಹ ಅವರು ತೊಡಗಿಸಿಕೊಳ್ಳುತ್ತಿದ್ದರು. ಪ್ರಾರಂಭದಲ್ಲಿ, ನಾವು ಸ್ಥಳೀಯ ಪ್ರದೇಶ ಮತ್ತು ಶಾಲೆಗಳ ಬಗ್ಗೆ ಮೂಲಭೂತ ಮಾಹಿತಿಯನ್ನು ಸಂಗ್ರಹಿಸುವಾಗ, ಶಾಲೆಗಳು ಮತ್ತು ಸಮುದಾಯದ ನಡುವೆ ಬಹಳಷ್ಟು ಬಿರುಕಿದೆ ಎಂಬ ವಾಸ್ತವಾಂಶವನ್ನು ಅರಿತೆವು. ಶಾಲೆಯಲ್ಲಿ ಸರ್ಕಾರದ ಕೆಲವು ಯೋಜನೆಗಳಡಿಯಲ್ಲಿ ಬರುವ ಸಾಮಗ್ರಿಗಳನ್ನು ಜನರಿಗೆ ವಿತರಿಸುವಾಗ ಅವುಗಳನ್ನು ತೆಗೆದುಕೊಳ್ಳಲು ಮಾತ್ರ ಪೋಷಕರು ಶಾಲೆಯ ಬಳಿ ಸುಳಿಯುತ್ತಿದ್ದರು. ಪ್ರಾಥಮಿಕ ಶಿಕ್ಷಣದಲ್ಲಿ ಸಮುದಾಯದ ಭಾಗವಹಿಸುವಿಕೆಯು ಎಷ್ಟರ ಮಟ್ಟಿಗೆ ಇದೆ ಎಂಬುದನ್ನು ನಾವು ಖಚಿತಪಡಿಸಿಕೊಳ್ಳುವ ಅಗತ್ಯವಿತ್ತು, ಹಾಗಾಗಿ ನಾವು ಶಾಲೆಗೆ ಭೇಟಿ ನೀಡಿದಾಗ, ಸಮುದಾಯದ ಸದಸ್ಯರು ಶಾಲೆಯೊಳಗೆ ಬರಲು ಹೆಚ್ಚು ಹಿಂಜರಿಕೆಯನ್ನು ತೋರುತ್ತಿದ್ದುದು ನಮ್ಮ ಗಮನಕ್ಕೆ ಬಂದಿತು. ಪ್ರಪ್ರಥಮವಾಗಿ ಇಂತಹ ಹಿಂಜರಿಕೆಯನ್ನು ಜನರಲ್ಲಿ ಹೋಗಲಾಡಿಸಬೇಕು ಎಂಬುದು ನಮ್ಮ ಮುಂದಿದ್ದ ಸವಾಲು ಎಂದೆನ್ನಬಹುದು. ಆಗ ನಾವು ಕಂಡುಕೊಂಡಿದ್ದು ಬಾಲ ಮೇಳಗಳು. ಇದರ ಮೂಲಕ ನಾವು ಆಯೋಜಿಸಿದ ಹಲವು ಚಟುವಟಿಕೆಗಳಲ್ಲಿ ಸಮುದಾಯಗಳು, ಶಾಲೆಗಳು ಮತ್ತು ಮಕ್ಕಳನ್ನು ಒಂದು ಸ್ಪಷ್ಟವಾದ ಸಂದರ್ಭದ ಮೂಲಕ ಬೆಸೆಯಲು ಮೇಳಗಳು ಒಂದು ಪ್ರಮುಖ ವೇದಿಕೆಯನ್ನು ಒದಗಿಸಿದವು. ಇದರಿಂದ ತರಗತಿಯ ಹೊರಗಿನ ಮಕ್ಕಳಿಗೂ ಕಲಿಕೆಯ

ಅನುಭವ ಹೆಚ್ಚಾಯಿತು, ಅಂದರೆ ಮಕ್ಕಳಲ್ಲಿ ಆಸಕ್ತಿ ಮತ್ತು ಅರ್ಥೈಸುವಿಕೆಯನ್ನು ಇದು ಬೆಳೆಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿದೆ. ನೆನಪಿನ ಶಕ್ತಿ, ಸೂಕ್ಷ್ಮತೆ, ಏಕಾಗ್ರತೆ, ಸೃಜನಾತ್ಮಕತೆ ಮತ್ತು ಕಾಲ್ಪನಿಕತೆ ಇವೆಲ್ಲವುಗಳನ್ನು ಆಧರಿಸಿ ಮಕ್ಕಳಿಗಾಗಿಯೇ ವಿವಿಧ ಆಟಗಳನ್ನು ಬಾಲ ಮೇಳದಲ್ಲಿ ಆಯೋಜಿಸಲಾಗಿತ್ತು. ಇವುಗಳ ಜೊತೆಗೆ ಇನ್ನೂ ಕೆಲವು ಆಟಗಳನ್ನು ಸೇರಿಸಲಾಗಿತ್ತು ಅಂದರೆ, ಡ್ರಾಯಿಂಗ್, ಪೇಂಟಿಂಗ್, ಬ್ರಿಕ್-ಬಕೆಟ್ ಆಟ, ಲೋಟ-ನಾಣ್ಯದ ಆಟ, ಎಲೆಕ್ಟ್ರಿಕ್ ಸರ್ಕ್ಯೂಟ್ ಸೆಲ್ ಆಟ, ಊಹಿಸುವ/ನೆನಪಿಸಿಕೊಳ್ಳುವ ಆಟ, ಎಲೆ-ದಾರದಿಂದ ವಿನ್ಯಾಸ ರಚನೆ, ರಿಂಗ್ ಆಟ, ಪೊಪೆಟ್/ಬೊಂಬೆಯ ಪ್ರದರ್ಶನ, ಪುಸ್ತಕಗಳು ಮತ್ತು ಮೈದಾನದಲ್ಲಿ ಆಡುವ ಆಟಗಳೂ ಸಹ ಇದರಲ್ಲಿ ಒಳಗೊಂಡಿದ್ದವು.

ಸಂಗ್ರಾಮಪುರ್ ಎಂಬ ಗ್ರಾಮದ ಶಾಲೆಯಲ್ಲಿ ಫೆಬ್ರವರಿ 2017ರಂದು ಮೊದಲನೆಯಾಗಿ 'ಬಾಲ ಮೇಳ'ವನ್ನು ಆಯೋಜಿಸಿದೆವು. ಈ ಕಾರ್ಯಕ್ರಮವನ್ನು ಆಯೋಜಿಸುವ ಮುನ್ನ ಗ್ರಾಮ ಪಂಚಾಯಿತಿ(VO) ಸಭೆಯಲ್ಲಿ ಬಾಲ ಮೇಳದ ಸಂಪೂರ್ಣ ಯೋಜನೆ ಮತ್ತು ಅದರ ಉದ್ದೇಶಗಳನ್ನು ಕುರಿತು ವಿವರಿಸಲಾಯಿತು. ಆ ಸಮಯದಲ್ಲಿ ಇಸಿವಿ ದೀದಿಗಳನ್ನು ಆಯ್ಕೆ ಮಾಡದೆ ಇದ್ದ ಕಾರಣ, ಗ್ರಾಮ ಪಂಚಾಯಿತಿ ಸದಸ್ಯರುಗಳೇ ಅದನ್ನು ಸಂಘಟಿಸುವ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತರು. ಗ್ರಾಮ ಪಂಚಾಯಿತಿ ಸದಸ್ಯರ ತಂಡವು ವಿದ್ಯಾ ಭವನ ತಂಡದ ಸದಸ್ಯರೊಟ್ಟಿಗೆ ಸೇರಿ ಶಾಲೆಗೆ ತೆರಳಿ ಶಾಲಾ ಶಿಕ್ಷಕರಿಂದ ಅನುಮತಿಯನ್ನು ಪಡೆದು ಅಲ್ಲಿನ ಮಕ್ಕಳಿಗಾಗಿ ಬಾಲ ಮೇಳವನ್ನು ಆಯೋಜಿಸಲು ನಿರ್ಧರಿಸಲಾಯಿತು. ಈ ಬಾಲ ಮೇಳಕ್ಕೆ ಅಗತ್ಯವಿರುವಂತಹ ಸಾಮಗ್ರಿಗಳನ್ನು ತರುವ ಜವಾಬ್ದಾರಿಯನ್ನು ಕೆಲವು ಜನರಿಗೆ ನೀಡಲಾಯಿತು, ಅವೆಲ್ಲವು ಸಾಮಾನ್ಯವಾಗಿ ತಮ್ಮ ಗ್ರಾಮದಲ್ಲಿಯೇ ಸಿಗುವಂತಹ ಸಾಮಗ್ರಿಗಳಾಗಿದ್ದವು ಅಂದರೆ, ನೆಲಹಾಸುಗಳು/ಚಾಪೆಗಳು, ಬೆಡ್‌ಶೀಟ್‌ಗಳು, ಬಕೆಟ್‌ಗಳು ಮತ್ತು ಲೋಟಗಳು ಇತ್ಯಾದಿ. ಇವುಗಳನ್ನು ಹೊರತುಪಡಿಸಿ, ಇನ್ನೂ ಅಗತ್ಯವಿರುವ ಕೆಲವು ಸಾಮಗ್ರಿಗಳನ್ನು ವಿದ್ಯಾ ಭವನದಿಂದ ಒದಗಿಸಲಾಗುವುದು ಎಂದು ನಿರ್ಧರಿಸಲಾಯಿತು.

ಸಮುದಾಯದ ಜನರ ಸಹಕಾರದೊಂದಿಗೆ ಈ ಬಾಲ ಮೇಳವನ್ನು ಆಯೋಜಿಸುವ ಸಲುವಾಗಿ ಶಾಲಾ ಆಡಳಿತ ಸಮಿತಿ ಸಭೆಯನ್ನು (School Management Committee (SMC)) ಕರೆಯಲಾಯಿತು. ಈ ಸಭೆಯಲ್ಲಿ ಶಾಲಾ ಆಡಳಿತ ಸಮಿತಿ ಸದಸ್ಯರು, ಶಾಲಾ ಶಿಕ್ಷಕರು, ವಿದ್ಯಾ ಭವನ ತಂಡದ ಸದಸ್ಯರು ಮತ್ತು ಸಮುದಾಯದ ಕೆಲವು ಮುಖಂಡರು ಭಾಗವಹಿಸಿದ್ದರು. ವಿದ್ಯಾ ಭವನ ತಂಡದ ಸದಸ್ಯರು ಸಭೆಯಲ್ಲಿ ಬಾಲ ಮೇಳ ವಿಷಯದ ಬಗ್ಗೆ ಪರಿಚಯಿಸಿ ವಿವರಿಸಿದರು.

ಸಭೆಯ ಕೊನೆಯಲ್ಲಿ ಬಾಲ ಮೇಳದಲ್ಲಿ ಮಕ್ಕಳಿಗಾಗಿ ಆಯೋಜಿಸಲಾದ ಕೆಲವು ಚಟುವಟಿಕೆಗಳ ಬಗ್ಗೆ ವಿವರಣೆಯನ್ನು ಸಹ ನೀಡಲಾಯಿತು. ಈ ಎಲ್ಲ ಅಂಶಗಳನ್ನು ಕೂಲಂಕಷವಾಗಿ ಆಲಿಸುತ್ತಿದ್ದ ಶಾಲೆಯ ಆಡಳಿತ ಮಂಡಳಿಗೆ ಈ ಮೇಳವನ್ನು ನಡೆಸುವ ಬಗ್ಗೆ ಹಲವು ಕುತೂಹಲಕಾರಿ ಪ್ರಶ್ನೆಗಳು ಮೂಡಿದ್ದವು ಅಂದರೆ, ಈ ಮೇಳದಲ್ಲಿ ಭಾಗವಹಿಸುವವರಿಗೆ ಊಟದ ವ್ಯವಸ್ಥೆ, ಚಟುವಟಿಕೆಗಳನ್ನು ನಡೆಸುವ ವಿಧಾನಗಳು ಮತ್ತು ಇತರೆ ವಿವರಗಳ ಬಗ್ಗೆ ಪ್ರಶ್ನೆಗಳಿದ್ದರೂ ಸಹ ಅವುಗಳ ಬಗ್ಗೆ ದನಿ ಎತ್ತದೆ ಸುಮ್ಮನಿದ್ದರು.

ಸಭೆಯ ಕೊನೆಯಲ್ಲಿ, ಮಕ್ಕಳಿಗಾಗಿಯೇ ಈ ಮೇಳವನ್ನು ಆಯೋಜಿಸಲಾಗಿದೆ ಎಂದು ಮತ್ತು ಅವರೇ ಇದರ ಮುಖ್ಯ ಕೇಂದ್ರಬಿಂದು ಎಂಬುದು ಎಲ್ಲರಿಗೂ ಮನವರಿಕೆಯಾಯಿತು. ಜೊತೆಗೆ ಈ ಮೇಳವು ಸಮುದಾಯದ ಸಹಭಾಗಿತ್ವದಲ್ಲಿ ಮಕ್ಕಳಿಗೆ ಕಲಿಸುವ ಉದ್ದೇಶಕ್ಕಾಗಿ ಕಲಿಕಾ ಚಟುವಟಿಕೆಗಳನ್ನು ಏರ್ಪಡಿಸುತ್ತಿರುವುದರಿಂದ ಇದು ಗ್ರಾಮದಲ್ಲಿ ನಡೆಯುತ್ತಿದ್ದ ಇತರ ಕಾರ್ಯಕ್ರಮಗಳಿಗಿಂತಲೂ ಸಂಪೂರ್ಣವಾಗಿ ಭಿನ್ನವಾಗಿರುತ್ತದೆ ಎಂದು ಎಲ್ಲರೂ ಅರ್ಥಮಾಡಿಕೊಳ್ಳುವಂತಾಯಿತು. ಕೊನೆಯಲ್ಲಿ ಈ ಬಾಲ ಮೇಳವನ್ನು ಆಯೋಜಿಸುವ ದಿನಾಂಕವನ್ನು ಪ್ರಕಟಿಸಲಾಯಿತು ಅಂದರೆ ದಿನಾಂಕ 3 ಫೆಬ್ರವರಿ 2017 ರಂದು ಬೆಳಗ್ಗೆ 10.00 ಗಂಟೆಯಿಂದ ಮಧ್ಯಾಹ್ನ 1.00 ಗಂಟೆಯವರೆಗೆ ಮೇಳವನ್ನು ನಡೆಸುವಂತೆ ಸಭೆಯ ಎಲ್ಲರ ಸಮ್ಮುಖದಲ್ಲಿ ತೀರ್ಮಾನಿಸಲಾಯಿತು. ಈ ಮೇಳದಲ್ಲಿ ಭಾಗವಹಿಸಲು ಗ್ರಾಮಕ್ಕೆ ಹತ್ತಿರದಲ್ಲಿದ್ದ ಇನ್ನೂ ಎರಡು ಗ್ರಾಮಗಳಾದ ಬಿಸಾ ಮತ್ತು ಮುರುಡಿಹ್ ಗ್ರಾಮದ ಪ್ರಾಥಮಿಕ ಶಾಲಾ ತರಗತಿಯ ಮಕ್ಕಳಿಗೂ ಸಹ ಅನುಮತಿ ನೀಡಲಾಯಿತು.

ಬಾಲ ಮೇಳವು ಅತ್ಯಂತ ಉತ್ಸಾಹದಿಂದ ಆರಂಭವಾಯಿತು. ವಿದ್ಯಾರ್ಥಿಗಳು, ಪೋಷಕರು ಮತ್ತು ಶಿಕ್ಷಕರು ಹೆಚ್ಚು ಉತ್ಸಾಹದಿಂದ ಎಲ್ಲ ಚಟುವಟಿಕೆಗಳಲ್ಲಿ ಭಾಗವಹಿಸಿದರು. ಸಾಮಾನ್ಯವಾಗಿ ಶಿಕ್ಷಕರು, ಪೋಷಕರು ಮತ್ತು ಮಕ್ಕಳು ಒಟ್ಟಿಗೆ ಆಡುವುದನ್ನು ಒಂದೇ ವೇದಿಕೆಯಲ್ಲಿ ಬಹುಶಃ ಯಾರೊಬ್ಬರು ನೋಡಿರುವುದಕ್ಕೆ ಸಾಧ್ಯವಿರುವುದಿಲ್ಲ, ಆದರೆ ಇಲ್ಲಿ ಅದು ಕೂಡ ಸಾಧ್ಯವಾಗಿದ್ದನ್ನು ಕಾಣಬಹುದಾಗಿತ್ತು. ಚಟುವಟಿಕೆಗಳನ್ನು ಮಾಡುತ್ತಿರುವುದನ್ನು ನೋಡಲು ಸಮುದಾಯದ ಎಲ್ಲ ಪುರುಷರು ಮತ್ತು ಮಹಿಳೆಯರು ಅಲ್ಲಿ ಹಾಜರಿದ್ದರು ಜೊತೆಗೆ ಹೆಚ್ಚು ಆಸಕ್ತಿಯಿಂದ ವೀಕ್ಷಿಸುತ್ತಿದ್ದರು ಹಾಗೂ ಬಹಳ ಉತ್ಸಾಹದಿಂದ ಭಾಗವಹಿಸುತ್ತಿದ್ದರು. ಈ ಮೇಳವನ್ನು ವಿಶೇಷವಾಗಿ ಪ್ರಾಥಮಿಕ ಶಾಲಾ ತರಗತಿಗಳ ವಿದ್ಯಾರ್ಥಿಗಳಿಗಾಗಿ ಎಂದೇ ಆಯೋಜಿಸಲಾಗಿತ್ತು, ಆದರೆ ಚಟುವಟಿಕೆಯಲ್ಲಿ ಭಾಗವಹಿಸಬೇಕೆಂಬ ಉತ್ಸಾಹ ಹಿರಿಯ ಪ್ರಾಥಮಿಕ ವಿದ್ಯಾರ್ಥಿಗಳಲ್ಲೂ ಮೂಡಿತು. ಹಾಗಾಗಿ

ಅವರು ಹಲವು ಚಟುವಟಿಕೆಗಳಲ್ಲಿ ಭಾಗವಹಿಸಲು ಮುಂದಾಗಿದ್ದನ್ನು ತಡೆಯಲು ಯಾರಿಗೂ ಸಾಧ್ಯವಾಗಲಿಲ್ಲ ಏಕೆಂದರೆ ಅವರು ಕೂಡ ಭಾಗವಹಿಸಲು ಎಲ್ಲರಂತೆ ಹೆಚ್ಚು ಉತ್ಸುಕರಾಗಿದ್ದರು.

ಈ ಮೊದಲೇ ಹೇಳಿದಂತೆ ಹತ್ತಿರದ ಎರಡು ಗ್ರಾಮಗಳ ಪ್ರಾಥಮಿಕ ಶಾಲೆ ತರಗತಿಗಳ ಮಕ್ಕಳೂ ತಮ್ಮ ಶಿಕ್ಷಕರೊಂದಿಗೆ ಮೇಳದಲ್ಲಿ ಪಾಲ್ಗೊಂಡಿದ್ದರು. ಈ ಮೂರು ಶಾಲೆಗಳಿಂದ ಸುಮಾರು 300 ಮಕ್ಕಳು ಮತ್ತು 15 ಶಿಕ್ಷಕರು ಸೇರಿದಂತೆ ಸುಮಾರು 100 ಪೋಷಕರು ಭಾಗವಹಿಸಿದ್ದರು, ವಿಶೇಷವಾಗಿ ಉದಯಪುರದಿಂದ ಬಂದ ವಿದ್ಯಾ ಭವನದ ನಾಲ್ವರು ಸದಸ್ಯರು, ಪ್ರದನ್‌ನ ಮೂವರು ಸದಸ್ಯರು ಮತ್ತು ವಿದ್ಯಾ ಭವನ ತಂಡದ ಮೂವರು ಸ್ಥಳೀಯ ಸದಸ್ಯರು ಅಲ್ಲಿ ಉಪಸ್ಥಿತರಿದ್ದರು.

ಮೇಳದ ಕೊನೆಯಲ್ಲಿ ಉದಯಪುರದ ವಿದ್ಯಾ ಭವನದ ಸದಸ್ಯರು ಮತ್ತು ಸ್ಥಳೀಯ ತಂಡದ ಸದಸ್ಯರು ಜೊತೆಗೂಡಿ ಬೊಂಬೆ ಪ್ರದರ್ಶನವನ್ನು ಮಾಡಿ ತೋರಿಸಿದರು.

ಈ ಮೇಳದ ದಿನವನ್ನು ವಿದ್ಯಾರ್ಥಿಗಳು ಅತ್ಯಂತ ಸಂಭ್ರಮ ಸಡಗರದಿಂದ ಆನಂದಿಸಿದರು. ಸಮುದಾಯದ ಜನರಲ್ಲಿ ಶಿಕ್ಷಣ ಮತ್ತು ಜಾಗೃತಿ ಮೂಡಿಸಲು ಇದೊಂದು ಉತ್ತಮ ಮತ್ತು ವಿಶೇಷ ಅವಕಾಶ ಎಂದು ಸಾಬೀತಾಯಿತು. ಅದರ ತತ್ ಕ್ಷಣದ ಪರಿಣಾಮವಾಗಿ ಶಾಲೆಯಲ್ಲಿ ಮಕ್ಕಳ ಹಾಜರಾತಿಯು ಗಣನೀಯವಾಗಿ ಹೆಚ್ಚಳವಾಯಿತು. ಅನಂತರದ ಅವಧಿಯಲ್ಲಿ ನಾಲ್ಕೈದು ಜನ ಪೋಷಕರು ತಮ್ಮ ಮಕ್ಕಳನ್ನು ಖಾಸಗಿ ಶಾಲೆಗಳನ್ನು ಬಿಡಿಸಿ ತಮ್ಮ ಗ್ರಾಮದ ಸರ್ಕಾರಿ ಶಾಲೆಗೆ ದಾಖಲಿಸಿದರು. ಈ ಪ್ರಸ್ತುತ ವರ್ಷ ಸಂಗ್ರಾಮಪುರ್ ಗ್ರಾಮದಲ್ಲಿ ಇಡೀ ಗ್ರಾಮದ ಜನತೆ, ಮಕ್ಕಳು, ಶಿಕ್ಷಕರು ಎಲ್ಲರೂ ಒಟ್ಟಿಗೆ ಸೇರಿ ದಾಖಲಾತಿ ಅಭಿಯಾನದಲ್ಲಿ ಪಾಲ್ಗೊಂಡಿದ್ದರು. ಇಂತಹ ಬಾಲ ಮೇಳಗಳನ್ನು ಆಯೋಜಿಸುವುದು ಈಗ ನಿತ್ಯದ ವೈಶಿಷ್ಟ್ಯಗಳಲ್ಲಿ ಒಂದಾಗಿದೆ. ಆರಂಭಿಕ ತಿಂಗಳುಗಳಲ್ಲಿ, ಮಕ್ಕಳು ಮತ್ತು ಶಾಲೆಯ ವಿಶೇಷ ಬೇಡಿಕೆಯ ಮೇಲೆ ಅವುಗಳನ್ನು ಸಂಘಟಿಸುವಲ್ಲಿ ನಾವು ಪ್ರಮುಖ ಪಾತ್ರ ವಹಿಸಿದ್ದೆವು.

ಇದರ ಮಧ್ಯೆ ದೀದಿಗಳನ್ನು ಆಯ್ಕೆ ಮಾಡಲಾಯಿತು ಮತ್ತು ಶಿಕ್ಷಣ ಕ್ಷೇತ್ರದಲ್ಲಿ ಅವರು ಕೆಲಸ ಮಾಡುವುದಕ್ಕಾಗಿ ಅವರಿಗೆ ವಿದ್ಯಾ ಭವನವು ಓರಿಯಂಟೇಶನ್ ಕಾರ್ಯಕ್ರಮವನ್ನು ನಡೆಸಿತು. ಆರಂಭದಲ್ಲಿ, ಅವರು ಗ್ರಾಮ ಪಂಚಾಯಿತಿಯಲ್ಲಿ ಎರಡು ವಿಷಯಗಳ ಬಗ್ಗೆ ಮುಖ್ಯವಾಗಿ ಚರ್ಚಿಸಬೇಕಾಗಿತ್ತು - ಒಂದು, ಪೋಷಕರು ತಮ್ಮ ಮಕ್ಕಳನ್ನು ಶಾಲೆಗೆ ತಪ್ಪದೆ ನಿಯಮಿತವಾಗಿ ಕಳುಹಿಸಬೇಕು ಮತ್ತೊಂದು ಸಂಜೆ ಮನೆಯಲ್ಲಿ ಅವರನ್ನು ಆಸಕ್ತಿಯಿಂದ ಓದುವಂತೆ ಮಾಡಬೇಕು ಎಂಬುದಾಗಿತ್ತು.

ಈಗೀಗ ಬಾಲಮೇಳಗಳನ್ನು ನಡೆಸುವ ಅನುಭವವು ತುಂಬ ಉತ್ತಮವಾಗಿ ಕಂಡುಬರುತ್ತಿದೆ. ಮತ್ತು ಇಂತಹ ಮೇಳಗಳನ್ನು ಆಯೋಜಿಸುವಲ್ಲಿ ನಾವು ದೀದಿಗಳಿಂದ ಗಮನಾರ್ಹ ಬೆಂಬಲವನ್ನು ಪಡೆಯಲಾರಂಭಿಸಿದ್ದೆವು, ಏಕೆಂದರೆ ಅವರು ಶಿಕ್ಷಕರೊಂದಿಗೆ ನಿರಂತರವಾಗಿ ನಡೆಸುತ್ತಿದ್ದ ಮಾತುಕತೆಯ ಪರಿಣಾಮವಾಗಿ ಶಿಕ್ಷಕರ ವಿಶ್ವಾಸವನ್ನು ಹೆಚ್ಚು ಗಳಿಸಿದ್ದರು. ದೀದಿಗಳನ್ನು ಶಾಲಾ ಚಟುವಟಿಕೆಗಳೊಂದಿಗೆ ನೇರವಾಗಿ ಸಂಪರ್ಕ ಹೊಂದಲು, ವಿದ್ಯಾ ಭವನವು ಬಾಲಮೇಳಗಳನ್ನು ಆಯೋಜಿಸುವುದನ್ನು ಕುರಿತಂತೆ ಓರಿಯಂಟೇಶನ್ ಮಾಡ್ಯೂಲ್ ಅನ್ನು ಸಿದ್ಧಪಡಿಸಿತು, ಅದರಲ್ಲಿ ಬಾಲ ಮೇಳಕ್ಕೆ ಸಂಬಂಧಿಸಿದ ವಿವರಗಳನ್ನು ಸವಿಸ್ತಾರವಾಗಿ ವಿವರಿಸಲಾಗಿತ್ತು.

ಈ ಓರಿಯಂಟೇಶನ್ ಕಾರ್ಯಕ್ರಮದ ಅನಂತರ, ದೀದಿಗಳು ತಮ್ಮ ತಮ್ಮ ಸರ್ಕಾರಿ ಶಾಲೆಗಳಲ್ಲಿ ಮೇಳಗಳನ್ನು ಯಶಸ್ವಿಯಾಗಿ ಆಯೋಜಿಸಲು ಪ್ರಾರಂಭಿಸಿದ್ದಾರೆ. ಈಗ ವಿದ್ಯಾ ಭವನವು ಮೇಳಗಳಿಗೆ ಕೇವಲ ಸಂಪನ್ಮೂಲಗಳ ವ್ಯವಸ್ಥೆಯನ್ನು ಒದಗಿಸುವುದಕ್ಕೆ ಮಾತ್ರ ಹೆಚ್ಚು ಪ್ರಾಮುಖ್ಯವನ್ನು ನೀಡಬೇಕಾಗಿದೆ. ಬಾಲ ಮೇಳಗಳಂತಹ ಚಟುವಟಿಕೆಗಳನ್ನು ಹೆಚ್ಚು ಹೆಚ್ಚು ಆಯೋಜಿಸುವುದರಿಂದ ಮಕ್ಕಳಿಗೆ ಶಾಲೆಯ ಬಗ್ಗೆ ಒಲವು ಮೂಡಿಸಲು ಇದು ಸಹಕಾರಿಯಾಗುವಂತೆ ಮಾಡುತ್ತದೆ ಮತ್ತು ಇದರ ಪರಿಣಾಮವಾಗಿ ಅವರು ಶಾಲೆಗೆ ತಪ್ಪದೆ ಬರಲು ಪ್ರಾರಂಭಿಸುತ್ತಾರೆ ಎಂಬುದನ್ನು ಇಲ್ಲಿ ಸ್ಪಷ್ಟವಾಗಿ ನೋಡಬಹುದಾಗಿದೆ.

ಈ ಹಿಂದೆ ಶಾಲೆಯಲ್ಲಿ ನಡೆಯುತ್ತಿದ್ದ ಮಾಸಿಕ ಸಭೆಗಳಿಗೆ ಹಾಜರಾಗುತ್ತಿದ್ದವರ ಸಂಖ್ಯೆ ತೀರ ಕಡಮೆ ಪ್ರಮಾಣದಲ್ಲಿತ್ತು. ಆದರೆ ಈಗ ಅರ್ಧಕ್ಕಿಂತ ಹೆಚ್ಚು ಸದಸ್ಯರು ಸಭೆಗಳಿಗೆ ಹಾಜರಾಗುತ್ತಿದ್ದಾರೆ.

ಇದು ದೀದಿಗಳ ಸತತ ಪ್ರಯತ್ನದಿಂದ ಸಾಧ್ಯವಾಗಿರುವುದಕ್ಕಾಗಿ ಎಲ್ಲ ಮನ್ನಣೆಯು ಅವರಿಗೆ ಸಲ್ಲಬೇಕಾಗುತ್ತದೆ. ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡುವ ಸಲುವಾಗಿ ಮೊದಲ ಬ್ಯಾಚ್ ನಲ್ಲಿ ಆಯ್ಕೆಯಾದ ದೀದಿಗಳಿಗೆ ಕಾರ್ಯಕ್ರಮಗಳ ಬಗ್ಗೆ ತಿಳಿಸಲು ವಿದ್ಯಾ ಭವನವು ಅವರಿಗೆ ಮೂರು ಓರಿಯಂಟೇಶನ್ ಕಾರ್ಯಕ್ರಮಗಳನ್ನು ನಡೆಸಿತು ಜೊತೆಗೆ ವಿದ್ಯಾ ಭವನವು ಈ ಯೋಜನೆಯನ್ನು ಹನ್ನೆರಡು ಗ್ರಾಮಗಳಲ್ಲಿ ಪ್ರಾರಂಭಿಸಿದ್ದು, ಎಲ್ಲ ಗ್ರಾಮದ ಶಾಲೆಗಳಲ್ಲಿ ತರಗತಿಯ ಹೊರಗೆ ಮಕ್ಕಳಿಗೆ ಬೋಧನಾ-ಕಲಿಕಾ ಚಟುವಟಿಕೆಗಳನ್ನು ನಡೆಸುತ್ತಿದೆ. ವಾರದಲ್ಲಿ ಎರಡು ಅಥವಾ ಮೂರು ದಿನ ದೀದಿಗಳು ಶಾಲೆಗೆ ಹೋಗುತ್ತಾರೆ. ಅವರು ಗ್ರಂಥಾಲಯದಲ್ಲಿರುವ ಪುಸ್ತಕಗಳನ್ನು ಮಕ್ಕಳಿಗೆ ವಿತರಿಸುವುದು, ಪದ್ಯವನ್ನು ಕಂಠಪಾಠ ಮಾಡಿಸುವುದು ಮತ್ತು ಕಥೆಗಳನ್ನು

ಓದುವಂತಹ ಚಟುವಟಿಕೆಗಳನ್ನು ಹೆಚ್ಚಾಗಿ ಆಯೋಜಿಸುತ್ತಾರೆ ಮತ್ತು ವಾರದ ಕೊನೆಯಲ್ಲಿ ಹಮ್ಮಿಕೊಳ್ಳುವ ಸಾಂಸ್ಕೃತಿಕ ಕಾರ್ಯಕ್ರಮದ ಸಿದ್ಧತೆಗಾಗಿಯೂ ಇವರು ಸಹಕರಿಸುತ್ತಾರೆ.

ತರಗತಿಯಲ್ಲಿ ಮಕ್ಕಳಿಗೆ ಕೇವಲ ಪಠ್ಯಪುಸ್ತಕ ಆಧಾರಿತ ಅಧ್ಯಯನದ ಹೊರತಾಗಿಯೂ ಶಾಲೆಯ ವಿವಿಧ ಚಟುವಟಿಕೆಗಳಲ್ಲಿ ಮಕ್ಕಳು ತೋರುತ್ತಿರುವ ಆಸಕ್ತಿಯನ್ನು ಗಮನದಲ್ಲಿಟ್ಟುಕೊಂಡಂತಹ ವಿದ್ಯಾ ಭವನವು ಇನ್ನಷ್ಟು ಹೆಚ್ಚಿನ ಯೋಜನೆಗಳನ್ನು ರೂಪಿಸುತ್ತಿದೆ. ಈ ನಿಟ್ಟಿನಲ್ಲಿ ಈಗಾಗಲೇ ಕೆಲಸ ಆರಂಭವಾಗಿದ್ದು, ಶೀಘ್ರದಲ್ಲೇ ಬ್ಲಾಕ್ನ ಇತರ ಶಾಲೆಗಳಲ್ಲಿ ಬಾಲ ಮೇಳದಂತಹ ಚಟುವಟಿಕೆಗಳನ್ನು ಹಮ್ಮಿಕೊಳ್ಳಲು ನಿರ್ಧರಿಸಿದೆ. ಶಿಕ್ಷಣ ಕ್ಷೇತ್ರಗಳಲ್ಲಿ ಸ್ವಯಂ ಸೇವಕಿಯರಾಗಿ ಕೆಲಸ ಮಾಡುತ್ತಿರುವ ದೀದಿಗಳು ಮತ್ತು ಗ್ರಾಮ ಪಂಚಾಯಿತಿ ಸದಸ್ಯರು ಈ ಒಂದು ಮಹತ್ತ್ವದ ಕಾರ್ಯದಲ್ಲಿ ಪ್ರಮುಖ ಸಹಯೋಗಿಗಳಾಗಿದ್ದಾರೆ. ಬಾಲ ಮೇಳವನ್ನು ಆಯೋಜಿಸಲು ಬೇಕಾಗಿರುವ ಅಗತ್ಯ ಸಾಮಗ್ರಿಗಳನ್ನು ಗ್ರಾಮದ ಗ್ರಾಮ ಪಂಚಾಯಿತಿಯೊಳಗೆ ಇಡಲು ವಿದ್ಯಾ ಭವನವು ಈಗಾಗಲೇ ನಿರ್ಧರಿಸಿರುವುದರಿಂದ ಸಮುದಾಯದ ಜನರು ಪ್ರತಿ ನಾಲ್ಕರಿಂದ ಆರು ತಿಂಗಳಿಗೊಮ್ಮೆ ಬಾಲ ಮೇಳವನ್ನು ನಡೆಸಲು ಬೇಕಾಗುವ ಸಾಮಗ್ರಿಗಳಿಗಾಗಿ ಕಾಯುವ ಪ್ರಮೇಯ ಬರುವುದಿಲ್ಲ.

ಇದರ ಅನುಭವವನ್ನು ಪಡೆದ ಅನಂತರ, ಶಾಲೆ ಅಥವಾ ತರಗತಿಯ ಹೊರಗೆ ನಡೆಸಲಾಗುತ್ತಿದ್ದ ಚಟುವಟಿಕೆಗಳಿಗಾಗಿ ನಾವು ಗ್ರಾಮ ಪಂಚಾಯಿತಿ ಕಛೇರಿಯನ್ನು ಒಂದು ಚಟುವಟಿಕೆಯ ಕೇಂದ್ರವನ್ನಾಗಿ ತೊಡಗಿಸಿಕೊಂಡೆವು. ಸಮುದಾಯದ ಜನರ ಒಮ್ಮತದಿಂದಲೇ ಇದನ್ನು ಮಾಡಲಾಗಿದೆ. ಪ್ರತಿ ಗ್ರಾಮ ಪಂಚಾಯಿತಿಯಲ್ಲಿ ವಿದ್ಯಾ ಭವನವು ಮಕ್ಕಳಿಗಾಗಿ ಕಥೆಪುಸ್ತಕಗಳು, ಬಾಲ ಮೇಳಕ್ಕೆ ಬೇಕಾದ ಸಾಮಗ್ರಿಗಳು, ಎಣಿಕೆಯನ್ನು ಕಲಿಯಲು ಮಣಿಗಳ ಸರ, ದೀದಿಗಳಿಗೆ ಶಿಕ್ಷಣಕ್ಕೆ ಸಂಬಂಧಿಸಿದ ವಾಚನ ಸಾಮಗ್ರಿ ಇತ್ಯಾದಿಗಳನ್ನು ಒದಗಿಸುತ್ತಿದೆ. ಇದರಿಂದಾಗಿ ಸಂಜೆ ಸಮಯದಲ್ಲಿ ಪ್ರಾಥಮಿಕ ತರಗತಿಯ ಮಕ್ಕಳು ಬೇರೆಡೆ ಎಲ್ಲೋ ಆಟವಾಡಿ ಕಾಲಹರಣ ಮಾಡುವ ಬದಲು ಗ್ರಾಮ ಪಂಚಾಯಿತಿ ಬಳಿ ದೀದಿಗಳ ಮೇಲ್ವಿಚಾರಣೆಯಲ್ಲಿ ಕ್ರೀಡೆ ಹಾಗೂ ಇತರೆ ಬೋಧನಾ-ಕಲಿಕಾ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವಂತೆ ಮಾಡಲು ಇದು ಅನುಕೂಲವಾಗಿದೆ. ಗ್ರಾಮ ಪಂಚಾಯಿತಿ ಕಛೇರಿಯನ್ನು ಒಂದು ಚಟುವಟಿಕೆ-ಕೇಂದ್ರವಾಗಿ ಅಭಿವೃದ್ಧಿಪಡಿಸುವುದು ಮತ್ತು ಪ್ರತಿ ಗ್ರಾಮದ ಬದಲಾವಣೆಗಾಗಿ ಅಲ್ಲಿನ ಕೆಲವು ಮಹಿಳೆಯರನ್ನು ದೀದಿಗಳಾಗಿ ನೇಮಿಸುವುದು ನಮ್ಮ ಮುಂದಿನ ಗುರಿಯಾಗಿದೆ. ಇದರಿಂದಾಗಿ ಶಿಕ್ಷಣ ಕ್ಷೇತ್ರದಲ್ಲಿ ಎಂದಿನಂತೆ

ಕೆಲಸ ಮುಂದುವರಿಸಲು, ಮಕ್ಕಳಿಗೆ ಗುಣಮಟ್ಟದ ಶಿಕ್ಷಣ ಸಿಗುವಂತೆ ಮಾಡಲು ಮತ್ತು ಶಾಲೆಯ ಮಾಲೀಕತ್ವದ ಮನೋಭಾವವನ್ನು ಸಮುದಾಯದಲ್ಲಿ ಬೆಳೆಸಲು ಸಾಧ್ಯವಾಗುತ್ತದೆ.

**ಕುಮಾರ್ ಅಮಲೇಂದು** ಅವರು SSA, SCERT, DIET ಗಳಂತಹ ಸರ್ಕಾರಿ ಶಿಕ್ಷಣ ಇಲಾಖೆಗಳೊಂದಿಗೆ 20 ವರ್ಷಗಳ ಕಾಲ ಕೆಲಸ ಮಾಡಿರುವ ಅನುಭವವನ್ನು ಹೊಂದಿದ್ದಾರೆ. ಅವರು ಈಗ ಜಾರ್ಖಂಡ್ ನಲ್ಲಿ ವಿದ್ಯಾ ಭವನ ಸೊಸೈಟಿಯ ಟಿ.ಆರ್.ಐ-ಪ್ರೈಡ್ (TRI-PRIDE) ಯೋಜನೆಯಡಿಯಲ್ಲಿ ಒಳಗೊಳ್ಳುವಿಕೆ, ಸಮಾನ ಮತ್ತು ಗುಣಮಟ್ಟದ ಶಿಕ್ಷಣವನ್ನು ಬಲಪಡಿಸುವ ಸಲುವಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಅವರನ್ನು kr.amalendu@gmail.com ಇ-ಮೇಲ್ ಐಡಿಯ ಮೂಲಕ ಸಂಪರ್ಕಿಸಬಹುದು.